ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ಕೃಷ್ಣಾ ಕೊಳ್ಳದಲ್ಲಿ ಬೇಸಿಗೆಯಲ್ಲಿ ಉದ್ಭವಿಸುವ ನೀರಿನ ಅಭಾವದ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

310 (245) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕರ್ನಾಟಕ ಹಾಗೂ ಮಹಾರಾಷ್ಟ್ರ ರಾಜ್ಯಗಳ ಕೃಷ್ಣಾ ಕೊಳ್ಳದಲ್ಲಿ ಬೇಸಿಗೆ ಕಾಲದಲ್ಲಿ ಉದ್ಭವಿಸುವ ನೀರಿನ ಅಭಾವ ತಣಿಸುವ ನಿಟ್ಟಿನಲ್ಲಿ ಎರಡೂ ರಾಜ್ಯಗಳು ಸಮನ್ವಯ ಸಮಿತಿ ರಚಿಸಿಕೊಂಡು ಈ ಭಾಗದ ರೈತರಿಗೆ ನೀರೊದಗಿಸುವಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹಾಗಿದ್ದಲ್ಲಿ, ರಾಜ್ಯದ ರೈತರಿಗೆ ಬರಗಾಲದಲ್ಲಿ ನೀರೊದಗಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಇದರ ರೂಪುರೇಷೆಗಳೇನು; ಈ ಬಗ್ಗೆ ವಿವರವಾದ ಮಾಹಿತಿಯನ್ನು ಒದಗಿಸುವುದು;

(ಇ) ಸದರಿ ಯೋಜನೆಯ ಕುರಿತು ರಾಜ್ಯ ಸರ್ಕಾರವು ಮಹಾರಾಷ್ಟ್ರ ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳಲು ಮಹಾರಾಷ್ಟ್ರ ಸರ್ಕಾರವನ್ನು ರಾಜ್ಯ ಸರ್ಕಾರ ಸಂಪರ್ಕಿಸಿದೆಯೇ; ಸದರಿ ಸಮನ್ವಯ ಸಮಿತಿ ವಿಚಾರದಲ್ಲಿ ಮಹಾರಾಷ್ಟ್ರ ಸರ್ಕಾರದ ನಿಲುವೇನು; (ವಿವರ ಒದಗಿಸುವುದು)

(ಈ) ಸದರಿ ಸಮನ್ವಯ ಸಮಿತಿಯು ಉತ್ತರ ಕರ್ನಾಟಕದ ಕೃಷ್ಣಾ ಕೊಳ್ಳದ ರೈತರಿಗೆ ಬೇಸಿಗೆ ಬರಗಾಲದಲ್ಲಿ ನೀರೊದಗಿಸುವ ವಿಚಾರ ಯಾವಾಗ ಸಾಕಾರಗೊಳ್ಳುವುದು?